

ಕರ್ನಾಟಕ
# ಸ್ಕೌಟ್ ಮತ್ತು ಗೈಡ್
KARNATAKA SCOUT & GUIDE
News Magazine

VOL.4 | FEBRUARY 2004 | No. 2

# FOUNDER







1857 1941

## B-P
LORD BADEN-POWELL OF GILWELL




ಕರ್ನಾಟಕ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್
೮೭ ವರ್ಷಗಳ ಪರಿಪೂರ್ಣ ಸೇವೆಯಲ್ಲಿ

1917-2004

ಪ್ರಕಾಶಕರು : ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ


The First Experimental Camp for Scout on Brownsea Island, Poole Harbour, Dorset, England in 1907




1908 B-P, with some of the boys on the launch crossing to Brownsea Island, England- the start of a glorious adventure.





1909 First Scout Rally at Crystal Palace. 10,000 Scouts gathered to greet their Chief.(B-P)



# ಕರ್ನಾಟಕ ಸ್ಕೌಟ್ ಮತ್ತು ಗೈಡ್

KARNATAKA SCOUT & GUIDE

News Magazine

**Vol - 4** **February - 2004** **No.2**




## ಪರಿವಿಡಿ



P E O P L E

**Great People talk about Ideas**
**Average people talk about Things**
**Small people talk about other People**

P E O P L E

# ರಾಜ್ಯ ಮುಖ್ಯ ಆಯುಕ್ತರ ನುಡಿ

**ಮಾನ್ಯರೆ,**

ಜನವರಿ 27 ರಿಂದ 31ರ ವರೆಗೆ ಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರದಲ್ಲಿ ಜರುಗಿದ ಆಯುಕ್ತರುಗಳ ಹಾಗೂ ಜಿಲ್ಲಾ ಕಾರ್ಯದರ್ಶಿಗಳ ತರಬೇತಿಗೆ ಒಟ್ಟು 46 ಅಭ್ಯರ್ಥಿಗಳು ಹಾಜರಿದ್ದರು. ಆಯುಕ್ತರುಗಳ ಶಿಬಿರದ ನಾಯಕರಾಗಿ ರಾಜ್ಯದ ಹಿರಿಯ ತರಬೇತುದಾರರಾದ ಶ್ರೀ ಟಿ.ಎಸ್. ಲೂಕಾಸ್ ವಹಿಸಿದ್ದರು. ಕಾರ್ಯದರ್ಶಿಗಳ ಶಿಬಿರದ ನಾಯಕರಾಗಿ ಹಿರಿಯ ತರಬೇತುದಾರರಾದ ಶ್ರೀ ಎಂ.ಎಂ. ಲೋಂಡೆ ವಹಿಸಿದ್ದರು. ಶ್ರೀ ಎಸ್. ಪಾಲ್‌ರಾಜ್, ಕುಮಾರಿ ರವಿ ವೆಸ್ಲಿ, ಶ್ರೀ ನಾರಾಯಣಶೆಟ್ಟಿ, ಶ್ರೀ ಮಾದವಸಿಂಗ್, ಶ್ರೀಮತಿ ಜಾನಕಿ ವೇಣುಗೋಪಾಲ್, ಶ್ರೀಮತಿ ಗೀತಾ ನಟರಾಜ್, ಶ್ರೀ ಎನ್. ಶ್ರೀನಿವಾಸನ್, ಕುಮಾರಿ ಬಿ. ರೇವತಿ ಸಹಾಯಕರುಗಳಾಗಿ ಭಾಗವಹಿಸಿದರು. ದಿನಾಂಕ 29 ರಂದು ನಾನು ಶಿಬಿರಕ್ಕೆ ಭೇಟಿ ನೀಡಿ ಶಿಬಿರಾರ್ಥಿಗಳೊಂದಿಗೆ ಚಳವಳಿಯ ಬೆಳವಣಿಗೆಯ ಬಗ್ಗೆ ವಿಚಾರ ವಿಮರ್ಶೆ ಮಾಡಿದೆ. ನನ್ನೊಂದಿಗೆ ಪ್ರೊ ಎಂ.ಎಸ್. ಅಪ್ಪ, ಶ್ರೀ ಎಂ.ಎಸ್. ನಟರಾಜ್ ಕಾರ್ಯಕ್ರಮದಲ್ಲಿ ಭಾಗವಹಿಸಿದರು.

ದಿನಾಂಕ 9ನೇ ಫೆಬ್ರವರಿಯಂದು ನವದೆಹಲಿಯಲ್ಲಿ ಜರುಗಿದ ರಾಷ್ಟ್ರೀಯ ಕಾರ್ಯಕಾರಿ ಸಮಿತಿ ಸಭೆಯಲ್ಲಿ ವಿಶೇಷ ಆಹ್ವಾನಿತರಾಗಿ ನಾನು ಮತ್ತು ರಾಷ್ಟ್ರೀಯ ಸಂಸ್ಥೆ ಉಪಾಧ್ಯಕ್ಷಿಣಿಯಾದ ಶ್ರೀಮತಿ ಎಂ.ಜಿ. ಬೋಪಯ್ಯ ಹಾಗೂ ರಾಜ್ಯದ ರಾಷ್ಟ್ರೀಯ ಪ್ರತಿನಿಧಿ ಕುಮಾರಿ ರವಿ ವೆಸ್ಲಿ ಭಾಗವಹಿಸಿದೆವು.

ದಿನಾಂಕ 16 ರಂದು ಧಾರವಾಡದಲ್ಲಿ ಜರುಗಿದ ಬೆಳಗಾಂ ವಿಭಾಗದ ಸ್ಥಳೀಯ ಸಂಸ್ಥೆಗಳ ಕಾರ್ಯದರ್ಶಿಗಳ ಹಾಗೂ ಸಹಾಯಕ ಜಿಲ್ಲಾ ಆಯುಕ್ತರುಗಳ ಸಮಾವೇಶದಲ್ಲಿ ಭಾಗವಹಿಸಿದ್ದೆ. ಶ್ರೀ ಎಂ.ಎ. ಚೆಲ್ಲಯ್ಯ, ಶ್ರೀ ನಾರಾಯಣಶೆಟ್ಟಿ, ಶ್ರೀಮತಿ ಜಾನಕಿವೇಣುಗೋಪಾಲ್, ಶ್ರೀಮತಿ ಕೆ.ಕೆ. ಲೀಲರವರುಗಳು ಸಮಾವೇಶದಲ್ಲಿ ವಿವಿಧ ವಿಷಯಗಳ ಬಗ್ಗೆ ಮಾಹಿತಿ ನೀಡಿ ವಿಭಾಗದಲ್ಲಿ ಚಳವಳಿಯ ಮುನ್ನೆಡೆಗೆ ಬೇಕಾದ ಎಲ್ಲ ವಿವರಗಳನ್ನು ನೀಡಿದರು.

ಧಾರವಾಡದ ನೂತನ ಜಿಲ್ಲಾಧಿಕಾರಿಗಳೂ ಹಾಗೂ ಜಿಲ್ಲಾ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಗೌರವ್‌ಗುಪ್ತ, ಭಾ.ಆ.ಸೇ. ಸಮಾವೇಶವನ್ನು ಉದ್ಘಾಟಿಸಿ ಚಳವಳಿಯ ಬೆಳವಣಿಗೆಗೆ ತಮ್ಮ ಸಂಪೂರ್ಣ ಸಹಕಾರ ಸಹಾಯ ನೀಡುವುದಾಗಿ ಆಶ್ವಾಸನೆ ನೀಡಿದರು.

ಸಮಾರೋಪ ಸಮಾರಂಭದ ಮುಖ್ಯ ಅತಿಥಿಯಾಗಿದ್ದ ಶ್ರೀ ಜಿ.ಎಂ. ಧನಂಜಯ, ಭಾ.ಆ.ಸೇ. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾಂ ವಿಭಾಗ ಅವರು ಮಾತನಾಡಿ ತಾವು ಈ ಹಿಂದೆ ಹಲವು ಜಿಲ್ಲೆಗಳಲ್ಲಿ ಭಾರತ್ ಸ್ಕೌಟ್ - ಗೈಡ್ ಸಂಸ್ಥೆಗೆ ನೀಡಿದ ಹಲವು ಅನುಕೂಲಗಳನ್ನು ಸ್ಮರಿಸಿ ತಮ್ಮ ಆಯುಕ್ತರ ಸೇವಾ ಅವಧಿಯಲ್ಲಿ ವಿಭಾಗದಲ್ಲಿ ಚಳವಳಿಯ ಸಂಪೂರ್ಣ ಬೆಳವಣಿಗೆಗೆ ಎಲ್ಲ ನೆರವನ್ನು ನೀಡುವುದಾಗಿಯೂ ಸಂಬಂಧ ಪಟ್ಟ ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳು ತಮ್ಮೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡು ಚಳವಳಿಯ ಉನ್ನತಿಗೆ ಸಾಧ್ಯವಾಗಬಹುದಾದ ಎಲ್ಲಾ ಸಹಾಯ ಸಹಕಾರ ಪಡೆಯಬೇಕೆಂದು ಸೂಚಿಸಿದರು.

ರಾಜ್ಯ ಸಂಸ್ಥೆಯ ಪರವಾಗಿ - ಜಿಲ್ಲಾ ಸಂಸ್ಥೆಗಳ ಪರವಾಗಿ ಇಬ್ಬರು ಹಿರಿಯ ಅಧಿಕಾರಿಗಳಿಗೆ ಸಂಸ್ಥೆಯ ಅಭಿವೃದ್ಧಿಗೆ ಹಾಗೂ ಬೆಳವಣಿಗೆಗೆ ಬೇಕಾಗುವ ಬಡ ಅರ್ಹವಿದ್ಯಾರ್ಥಿಗಳಿಗೆ ಸ್ಕೌಟ್ - ಗೈಡ್ ಸಮವಸ್ತ್ರ ಹಾಗೂ ಗ್ರಾಮ, ತಾಲ್ಲೂಕು, ಪಟ್ಟಣ, ನಗರ ಪಾಲಿಕೆ ಹಾಗೂ ಜಿಲ್ಲಾ ಪಂಚಾಯತ್ ಅಥವಾ ಸರ್ಕಾರದ ಯಾವುದೇ ಲಭ್ಯವಿರುವ ಅವಕಾಶಗಳಿಂದ ಪ್ರತಿ ವರ್ಷ ವಾರ್ಷಿಕ ಆಯವ್ಯಯದಲ್ಲಿ ಈ ಬಗ್ಗೆ ಪ್ರತ್ಯೇಕ ಹಣ ತೆಗೆದಿರುಸುವ ಬಗ್ಗೆ, ಬ್ಲಾಕ್ ಸಂಪನ್ಮೂಲ ವ್ಯಕ್ತಿ ಹಾಗೂ ಕ್ಲಸ್ಟರ್ ಸಂಪನ್ಮೂಲ ವ್ಯಕ್ತಿಗಳು ತಮ್ಮಗಳ ಕ್ಷೇತ್ರಗಳಲ್ಲಿ ಸ್ಕೌಟ್ - ಗೈಡ್ ಚಟುವಟಿಕೆಯನ್ನು ಅಭಿವೃದ್ಧಿ ಪಡಿಸಲು ಸೂಕ್ತ ಆದೇಶ ಹೊರಡಿಸಬೇಕೆಂದು ಕೋರಿದ್ದೇನೆ. ಈರ್ವರೂ ನಮ್ಮಗಳ ಎಲ್ಲ ಬೇಡಿಕೆಗಳನ್ನು ಪರಿಶೀಲಿಸಿ ಸಹಾಯ ಮಾಡುವುದಾಗಿ ಆಶ್ವಾಸನೆ ನೀಡಿದ್ದಾರೆ. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎಂ. ಲೋಂಡೆ, ಕಾರ್ಯದರ್ಶಿ ಕುಮಾರಿ ಪ್ರೇಮಾ ಸಿ. ಮಂಗಳೂರು, ಶ್ರೀ ಬಿ.ಕೆ. ಪಾಟೀಲ್, ಶ್ರೀಮತಿ ಪ್ರಭಾಲೊಂಡೆ ಹಾಗೂ ಹಿರಿಯ ಉಪಾಧ್ಯಕ್ಷರುಗಳು, ಪದಾಧಿಕಾರಿಗಳು ಹಾಜರಿದ್ದು ಸಮಾವೇಶವನ್ನು ಯಶಸ್ವಿಗೊಳಿಸಿದರು.

ಧಾರವಾಡದಲ್ಲಿ ನಡೆದ ವಿಭಾಗಮಟ್ಟದ ಸಮಾವೇಷಕ್ಕೆ ಹೋದ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಗಳಾದ ಹಾವೇರಿ, ದಾವಣಗೆರೆ, ಚಿತ್ರದುರ್ಗ ಮತ್ತು ತುಮಕೂರು ಜಿಲ್ಲಾ ಸಂಸ್ಥೆಗಳ ಎಲ್ಲಾ ಪದಾಧಿಕಾರಿಗಳೊಂದಿಗೆ. ಸ್ಕೌಟ್, ಗೌಡ್ ಚಳುವಳಿಯ, ಕಾರ್ಯಕ್ರಮಗಳ ಮತ್ತು ಚಟುವಟಿಕೆಗಳ ಬಗ್ಗೆ ಚರ್ಚಿಸಿದ್ದೇನೆ.

ಸ್ಕೌಟ್ - ಗೈಡ್ ಸಂಸ್ಥೆಯ ಸಂಸ್ಥಾನಿಕ ಲಾರ್ಡ್ ಬೇಡನ್ ಪೊವೆಲ್ ಹಾಗೂ ಆಲೇವ್ ಲೇಡಿ ಬೇಡನ್ ಪೊವೆಲ್‌ರವರ ಜನ್ಮ ದಿನಾಚರಣೆ 22 ಫೆಬ್ರವರಿಯಂದು ಪ್ರಪಂಚದ 216 ರಾಷ್ಟ್ರಗಳಲ್ಲಿ "ಚಿಂತನಾದಿನ" ವನ್ನಾಗಿ ಅತ್ಯಂತ ಸಂಭ್ರಮ - ಸಡಗರದಿಂದ ಜರುಗಿಸಲಾಗುವುದು.

ರಾಜ್ಯ ಸಂಸ್ಥೆಯಲ್ಲಿ ಗೈಡ್ ವಿಭಾಗ ಕಚೇರಿ ಶಾಂತಿಗೃಹದಲ್ಲಿ ಲಾರ್ಡ್ ಮತ್ತು ಲೇಡಿ ಬೇಡನ್ ಪೊವೆಲ್ ಜನ್ಮದಿನವನ್ನು "ಚಿಂತನಾ ದಿನವಾಗಿ" 22 ರಂದು ಅದ್ದೂರಿಯಾಗಿ ಆಚರಿಸಲಾಯಿತು. ಇನ್ನೂರಕ್ಕೂ ಹೆಚ್ಚು ಸ್ಕೌಟ್ಸ್ - ಗೈಡ್ಸ್‌ಗಳು, ಸ್ಕೌಟರ್ - ಗೈಡರ್‌ಗಳು ಹಾಗೂ ಸಂಸ್ಥೆಯ ಪದಾಧಿಕಾರಿಗಳು ಹಾಜರಿದ್ದು ಸಮಾರಂಭ ಯಶಸ್ವಿಯಾಗಿ ಜರುಗಿತು.

ವಿಶ್ವ ಕಂಡ ಅಪರೂಪದ ವ್ಯಕ್ತಿಗಳ ಸಾಲಿನಲ್ಲಿ ಮಹಾಪುರಷರಾಗಿ ಬೆಳಗುವ ಲಾರ್ಡ್ ಬೇಡನ್ ಪೊವೆಲ್ ಅವರದು. ಜಾತಿ - ಮತ - ವರ್ಣಗಳ ಸೀಮಾರೇಖೆಯನ್ನು ಮೀರಿ ಬೆಳದಿರುವ ವಿಶ್ವಮಾನ್ಯ ಅಗ್ರಗಣ್ಯ ಯುವ ಚಳವಳಿ ಸ್ಕೌಟ್ - ಗೈಡ್ ಚಳವಳಿ. ಯುವ ಜನಾಂಗದಲ್ಲಿ ಸಚ್ಚಾರಿತ್ರ, ಸಜ್ಜನಿಕೆ, ಕ್ರಿಯಾಶೀಲತೆ, ಜೀವನ ಕೌಶಲ್ಯ - ರಾಷ್ಟ್ರೀಯತೆ, ಆತ್ಮಸ್ಥೈರ್ಯ ಹಾಗೂ ಸೇವೆಯ ಮೌಲ್ಯಗಳನ್ನು ಬೆಳಸಲು ಸಹಕಾರಿಯಾಗುವ ಚಳವಳಿ ಸ್ಕೌಟ್ - ಗೈಡ್ ಚಳವಳಿ. ನೀವೂ ಸೇರಿರಿ, ಇತರರನ್ನು ಸೇರಿಸಿ. ಚಳವಳಿಯ ಬೆಳವಣಿಗೆಗೆ ನಮ್ಮ ಪಾಲಿನ ಕರ್ತವ್ಯ ಮಾಡೋಣ. ಸಂಸ್ಥೆಗಳ ವಾರ್ಷಿಕ ಗುರಿ ಮುಟ್ಟುವ ವರ್ಷಾಂತ್ಯ ಬಂದಿದೆ. ನಮ್ಮ ಜಿಲ್ಲೆಗಳು - ಸ್ಥಳೀಯ ಸಂಸ್ಥೆಗಳು ತಮ್ಮಗಳ ಪ್ರಯತ್ನದಲ್ಲಿ ಯಶಸ್ವಿಯಾಗಲಿ ಎಂದು ಆಶಿಸುತ್ತೇನೆ.

ತಮ್ಮ ವಿಶ್ವಾಸಿ,

(ಕೊಂಡಜ್ಜಿ ಬ. ಷಣ್ಮುಖಪ್ಪ)




*The Bharat Scouts and Guides, Karnakata Observed the World Scout Day and Thinking Day on 22nd February 2004 at Shanthi Gruha, Palace Road, Bangalore. 300 Scouts and Guides along with Unit Leaders participated in the event. All faith Prayer, International Songs, Cultural Programme, were held.*

*Every year Since 1932, Scouts and Guides all over the world join to-gether on 22nd February to focus on the International Scouting and Guiding and also to express their love and regards for the Founder Lord B.P. and Lady B.P. It is an Opportunity to assist the promotion of the movement around the world and to give all Cubs, Bulbuls, Scouts, Guides, Rovers and Rangers a chance to strengthen the friendship and Special good trun to mark the Day. It is not only an opportunity to think but also to act and share.*

*Smt. Lalitha Krishnaswamy Vice - President and Sri Kondajji B. Shanmukhappa, State Chief Commissioner and Commissioners of all Ranks, from the City District and the State were attended the event.*

## ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್




ರಾಜ್ಯ ವಿವಿಧ ನಗರ, ಪಟ್ಟಣ, ತಾಲ್ಲೂಕು ಮತ್ತು ಪದಾಧಿಕಾರಿಗಳು ಸಕ್ರೀಯವಾಗಿ ಪಲ್ಸ್ ಪೋಲಿಯೋ ಲಸಿಕೆಯನ್ನು ಮಾಡಿಕೊಂಡರು. ಮತ್ತು ಮಕ್ಕಳನ್ನು ಮಾನವ ಜೀವನಕ್ಕೆ ಈ ಪಲ್ಸ್ ಎಂದು ಜನರಿಗೆ ಮನವರಿಕೆ ಮಾಡಿದರು.




ಹಾಗೂ ಜಿಲ್ಲೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಹಾಕಿಸಲು ಸಾರ್ವಜನಿಕರಲ್ಲಿ ಮನವಿ ಕರೆತಂದು ಲಸಿಕೆಯನ್ನು ಆಕಿಸಿದರು. ಪೋಲಿಯೋ ಲಸಿಕೆ ಬಹಳ ಮುಖ್ಯ ಐದು ವರ್ಷದೊಳಗಿನ ಮಕ್ಕಳಿಗೆ ಪಲ್ಸ್ ಪೋಲಿಯೋ ಲಸಿಕೆಯನ್ನು ಇನ್ನು ಮುಂದೆಯೂ ಹಾಕಿಸುವಂತೆ ಮನವಿ ಮತ್ತು ಕರೆಯನ್ನು ಮಾಡಿದರು.

## ವಿಭಾಗಮಟ್ಟದ ಸಹಾಯಕ ಜಿಲ್ಲಾ ಆಯುಕ್ತರುಗಳು ಮತ್ತು ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳ ಸಮಾವೇಶಗಳು

### ೧) ಬೆಂಗಳೂರು ವಿಭಾಗ

ಬೆಂಗಳೂರು ವಿಭಾಗದ ಸಹಾಯಕ ಜಿಲ್ಲಾ ಆಯುಕ್ತರುಗಳ ಮತ್ತು ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳ ಸಮಾವೇಶ ದಿನಾಂಕ ೨೪.೦೨.೨೦೦೪ರಂದು ಬೆಂಗಳೂರಿನ ಪ್ರಕಾಶ್ ಕೆಫೆ ಸಭಾಂಗದಲ್ಲಿ ನಡೆಯಿತು. ೫೦ ಜನ ಸಹಾಯಕ ಜಿಲ್ಲಾ ಆಯುಕ್ತರುಗಳು ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು ಈ ಸಮಾವೇಶದಲ್ಲಿ ಭಾಗವಹಿಸಿದ್ದರು. ಶ್ರೀಮತಿ ಎಂ.ಜಿ. ಬೋಪಯ್ಯ, ರಾಜ್ಯ ಆಯುಕ್ತರು (ಗೈಡ್) ಸಮಾವೇಶವನ್ನು ಉದ್ಘಾಟಿಸಿದರು. ಸಂಜೆ ೫.೦೦ ಘಂಟೆಗೆ ನಡೆದ ಮುಕ್ತಾಯ ಸಮಾರಂಭದಲ್ಲಿ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಭಾಗವಹಿ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿ ಕಾರ್ಯ ಚಟುವಟಿಕೆಗಳ ಬಗ್ಗೆ ಮಾತನಾಡಿದರು. ಶ್ರೀ ಪಿ. ಪಳನಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಇವರು ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

ಈ ಸಮಾವೇಶವನ್ನು ಬೆಂಗಳೂರು ದಕ್ಷಿಣ ಜಿಲ್ಲೆಯವರು ರಾಜ್ಯ ಸಂಸ್ಥೆಯ ಸಹಯೋಗದೊಂದಿಗೆ ಯಶಸ್ವಿಯಾಗಿ ಸಂಘಟಿಸಿದ್ದರು.

### ೨) ಮೈಸೂರು ವಿಭಾಗ

ಮೈಸೂರು ವಿಭಾಗದ ಸಹಾಯಕ ಜಿಲ್ಲಾ ಆಯುಕ್ತರುಗಳ ಮತ್ತು ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳ ಸಮಾವೇಶವು ದಿನಾಂಕ ೦೫-೦೨-೨೦೦೪ ರಂದು ಉಡುಪಿ ಮಹಿಷಮರ್ಧಿನಿ ಸ್ಕೌಟ್ ಭವನದ ಆವರಣದಲ್ಲಿ ನಡೆಯಿತು. ಮೈಸೂರು ವಿಭಾಗದ ವಿವಿಧ ಜಿಲ್ಲೆಗಳಿಂದ ೩೫ಕ್ಕೂ ಹೆಚ್ಚು ಸಹಾಯಕ ಜಿಲ್ಲಾ ಆಯುಕ್ತರುಗಳು ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು ಭಾಗವಹಿಸಿದ್ದರು. ಶ್ರೀ ಎಡ್ವಿನ್ ಜಿ. ಆಳ್ವಾ ಜಿಲ್ಲಾ (ಸ್ಕೌಟ್) ಆಯುಕ್ತರು ಉದ್ಘಾಟನಾ ಸಮಾರಂಭ ಅಧ್ಯಕ್ಷತೆ ವಹಿಸಿದ್ದರು. ಶ್ರೀ ರವೀಂದ್ರ ನಾಯ್ಕ ಉಪಾಧ್ಯಕ್ಷರು ಉಡುಪಿ ಜಿಲ್ಲಾ ಸಂಸ್ಥೆ ಇವರು ಸಮಾವೇಶವನ್ನು ಉದ್ಘಾಟಿಸಿದರು ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಜಿ. ವಾರಂಬಳ್ಳಿ, ಉಪಸ್ಥಿತರಿದ್ದರು. ಸ್ಥಳಿಯ ಸಂಸ್ಥೆಗಳು ೨೦೦೪-೨೦೦೫ನೇ ಸಾಲಿನಲ್ಲಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳು ತರಬೇತಿ ಕಾರ್ಯಕ್ರಮ, ಗಣತಿ ಬ್ಯಾಡ್ಜ್ ಕಮಿಟಿ ರಚನೆ ಇತ್ಯಾದಿ ವಿಷಯಗಳನ್ನು ಸಮಾವೇಶದಲ್ಲಿ ಚರ್ಚಿಸಲಾಯಿತು.

ಈ ಸಮಾವೇಶವನ್ನು ಉಡುಪಿ ಜಿಲ್ಲಾ ಸಂಸ್ಥೆಯವರು ರಾಜ್ಯ ಸಂಸ್ಥೆ ಸಹಯೋಗದೊಂದಿಗೆ ಯಶಸ್ವಿಯಾಗಿ ನಡೆಸಿದರು.

### ೩) ಗುಲ್ಬರ್ಗಾ ವಿಭಾಗ

ಗುಲ್ಬರ್ಗಾ ವಿಭಾಗದ ಸಹಾಯಕ ಜಿಲ್ಲಾ ಆಯುಕ್ತರುಗಳ ಮತ್ತು ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳ ಸಮಾವೇಶ ದಿನಾಂಕ ೧೦-೦೨-೨೦೦೪ರಂದು ಕೆ.ಜಿ. ಪಾಟೀಲ್ ಪ್ರೌಢಶಾಲೆ ಬಡೇಪುರ ಗುಲ್ಬರ್ಗಾದಲ್ಲಿ ನಡೆಯಿತು. ೨೫ ಜನ ಸಹಾಯಕ ಜಿಲ್ಲಾ ಆಯುಕ್ತರುಗಳು ಮತ್ತು ಕಾರ್ಯದರ್ಶಿಗಳು ಈ ಸಮಾವೇಶದಲ್ಲಿ ಭಾಗವಹಿಸಿದ್ದರು.

ಆಯುರ್ವೇದ ಮುಕ್ತದಳದ ರೋವರ್ಸ್ ರೇಂಜರ್ಸ್‌ಗಳು ಭಾಗವಹಿಸಿ ವಸ್ತು ಪ್ರದರ್ಶನ, ಗುಡಾರ ನಿರ್ಮಾಣ ಹಾಗೂ ಪೈನರಿಂಗ್ ಪ್ರಾಜೆಕ್ಟ್ ಇತ್ಯಾದಿ ಚಟುವಟಿಕೆಗಳನ್ನು ಏರ್ಪಡಿಸಿದ್ದರು. ಗಣತಿ, ಸ್ಕೌಟ್-ಗೈಡ್ಸ್ ಕಾರ್ಯಕ್ರಮಗಳು, ಅಭಿವೃದ್ಧಿ

ಕಾರ್ಯಗಳು ಹಾಗೂ ೨೦೦೪-೨೦೦೫ನೇ ಸಾಲಿನಲ್ಲಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ಬಗ್ಗೆ ಸಮಾವೇಶದಲ್ಲಿ ಚರ್ಚಿಸಲಾಯಿತು.

ಸಂಜೆ ೪.೩೦ಕ್ಕೆ ನಡೆದ ಮುಕ್ತಾಯ ಸಮಾರಂಭದಲ್ಲಿ ಜಿಲ್ಲಾ ಉಪನಿರ್ದೇಶಕರು ಮತ್ತು ಜಿಲ್ಲಾ ಆಯುಕ್ತರಾದ ಶ್ರೀ ರುದ್ರಪ್ಪರವರು ಅಧ್ಯಕ್ಷತೆ ವಹಿಸಿ ಮಾತನಾಡಿದರು. ಶ್ರೀ ಶಂಕರಯ್ಯಸ್ವಾಮಿ ಚಿದ್ರಿ, ಜಂಟಿ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಜಿಲ್ಲಾ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಗುಲ್ಬರ್ಗಾ ಇವರು ಸಮಾವೇಶಕ್ಕೆ ಭೇಟಿ ನೀಡಿದ್ದರು.

**೪) ಬೆಳಗಾಂ ವಿಭಾಗ**

ಬೆಳಗಾಂ ವಿಭಾಗದ ಸಹಾಯಕ ಜಿಲ್ಲಾ ಆಯುಕ್ತರುಗಳು ಮತ್ತು ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳ ಸಮಾವೇಶವು ದಿನಾಂಕ ೧೬-೦೨-೨೦೦೪ ರಂದು ಧಾರವಾಡ ಜಿಲ್ಲಾ ಸಂಸ್ಥೆ ಆವರಣದಲ್ಲಿ ಜರುಗಿತು.

೫೦ ಜನ ಸಹಾಯಕ ಜಿಲ್ಲಾ ಆಯುಕ್ತರುಗಳು ಸ್ಥಳಿಯ ಸಂಸ್ಥೆ ಕಾರ್ಯದರ್ಶಿಗಳು ಈ ಸಮಾವೇಶದಲ್ಲಿ ಭಾಗವಹಿಸಿದ್ದರು. ಶಿರಹಟ್ಟಿ ತಾಲ್ಲೂಕು ಹಾಗೂ ಸವಣೂರು ತಾಲ್ಲೋಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳು ಪಾಲ್ಗೊಂಡಿದ್ದರು.

ಶ್ರೀ ಗೌರವ ಗುಪ್ತ ಐ.ಎ.ಎಸ್. ಜಿಲ್ಲಾಧಿಕಾರಿ ಮತ್ತು ಜಿಲ್ಲಾ ಅಧ್ಯಕ್ಷರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಧಾರವಾಡ ಜಿಲ್ಲೆ ಇವರು ಉದ್ಘಾಟಿಸಿ ಮಾತನಾಡುವಾಗ ಜಿಲ್ಲಾ ಮಟ್ಟದ ಎಲ್ಲಾ ಚಟುವಟಿಕೆಗಳಿಗೆ ಜಿಲ್ಲಾ ಆಡಳಿತ ವತಿಯಿಂದ ಸಹಾಯ ಸಹಕಾರ ನೀಡುವುದಾಗಿ ತಿಳಿಸಿದರು.

ಸಂಜೆ ನಡೆದ ಸಮಾರೋಪ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಶ್ರೀ ಜಿ.ಎಂ. ಧನಂಜಯ, ಐ.ಎ.ಎಸ್. ಹೆಚ್ಚುವರಿ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ ಬೆಳಗಾಂ ವಿಭಾಗ ಇವರು ಭಾಗವಹಿಸಿ ಮಾತನಾಡುವಾಗ ನನ್ನ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಜಿಲ್ಲೆಗಳಲ್ಲಿ ಸ್ಕೌಟ್ ಮತ್ತು ಗೈಡ್ ಅಭಿವೃದ್ಧಿ ಕಾರ್ಯಗಳಿಗೆ ಸಹಾಯ ಸಹಕಾರ ನೀಡುವುದಾಗಿ ತಿಳಿಸಿದರು ಹಾಗೂ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳ ಸಭೆ ಕರೆದು ಎಲ್ಲಾ ಶಾಲೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ತಂಡಗಳನ್ನು ಪ್ರಾರಂಭಿಸುವುದಾಗಿ ಭರವಸೆ ನೀಡಿದರು.

ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಸಭೆಯನ್ನುದ್ದೇಶಿ ಮಾತನಾಡುವಾಗ ಎಲ್ಲಾ ಜಿಲ್ಲೆಗಳಲ್ಲೂ ಗಣತಿ ಹೆಚ್ಚಾಗಬೇಕು ಅಭಿವೃದ್ಧಿ ಕಾರ್ಯಗಳು ಆಗಬೇಕು ಎಂದು ನುಡಿದರು.

ಪ್ರಾರಂಭದಲ್ಲಿ ಶ್ರೀ ಎಂ.ಎಂ. ಲೋಂಡೆಯವರು ಎಲ್ಲರನ್ನು ಸ್ವಾಗತಿಸಿದರು.

ಈ ಸಮಾವೇಶವನ್ನು ರಾಜ್ಯ ಸಂಸ್ಥೆಯ ಸಹಾಯದಿಂದ ಧಾರವಾಡ ಜಿಲ್ಲಾ ಸಂಸ್ಥೆ ವ್ಯವಸ್ಥಿತವಾಗಿ ಏರ್ಪಡಿಸಿದ್ದರು.

ನಾಲ್ಕು ವಿಭಾಗದಲ್ಲಿ ನಡೆದ ಸಮಾವೇಶದಲ್ಲಿ (೧) ಸ್ಕೌಟ್, ಗೈಡ್ ಬೆಳವಣಿಗೆ, ಅಭಿವೃದ್ಧಿ, (೨) ಯುವಕ, ಯುವತಿಯರನ್ನು ಕಾರ್ಯಕ್ರಮದಲ್ಲಿ ತೊಡಗಿಸುವುದು, (೩) ವಯಸ್ಕ ನಾಯಕರ ಸಂಪನ್ಮೂಲ, (೪) ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಆಡಳಿತ (೫) ನಿಧಿ ಸಂಗ್ರಹಣೆ, (೬) ಸಾರ್ವಜನಿಕ ಸಂಪರ್ಕ, (೭) ಪದಕ ವಿತರಣಾ ಸಮಿತಿ, (೮) ಸಹಾಯಕ ಜಿಲ್ಲಾ ಆಯುಕ್ತರುಗಳು ಮತ್ತು ಸ್ಥಳಿಯ ಸಂಸ್ಥೆ ಕಾರ್ಯದರ್ಶಿಗಳ ಪಾತ್ರ ಹಾಗೂ (೯) ೨೦೦೪-೨೦೦೫ನೇ ಸಾಲಿನಲ್ಲಿ ಹಮ್ಮಿಕೊಂಡಿರುವ ರಾಜ್ಯ ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆ ಚಟುವಟಿಕೆಗಳ ಬಗ್ಗೆ ಈ ಸಮಾವೇಶಗಳಲ್ಲಿ ಚರ್ಚಿಸಲಾಯಿತು.

# 55ನೇ ಗಣರಾಜ್ಯ ದಿನಾಚರಣೆ

ದಿನಾಂಕ ೨೬ನೇ ಜನವರಿ ೨೦೦೪ ರಂದು ಬೆಂಗಳೂರು ಫೀಲ್ಡ್ ಮಾರ್ಷಲ್ ಮಾಣಿಕ್ ಷಾ ಪರೇಡ್ ಮೈದಾನದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಪರವಾಗಿ ಒಂದು ಸ್ಕೌಟ್ ತಂಡ ಮತ್ತು ಒಂದು ಗೈಡ್ ತಂಡ ಭಾಗವಹಿಸಿದ್ದವು. ಘನತೆವೆತ್ತ ರಾಜ್ಯಪಾಲರಾದ ಸನ್ಮಾನ್ಯ ಶ್ರೀ ಟಿ.ಎನ್. ಚತುರ್ವೇದಿಯವರು ಸಮಾರಂಭದಲ್ಲಿ ಭಾಗವಹಿಸಿ ಧ್ವಜಾರೋಹಣ ಮಾಡಿದರು. ಎನ್‌ಸಿಸಿ. ಆರಕ್ಷಕದಳ, ಎನ್‌ಎಸ್‌ಎಸ್. ಭೂಸೇನೆ, ವಾಯುಸೇನೆ ಜೊತೆಯಲ್ಲಿ ಸ್ಕೌಟ್ ಮತ್ತು ಗೈಡ್ಸ್‌ಗಳ ಪಥಸಂಚಲನೆಯನ್ನು ವೀಕ್ಷಿಸಿದರು.

# ಕೇಂದ್ರ ಕಛೇರಿಯಲ್ಲಿ ಗಣರಾಜ್ಯ ದಿನಾಚರಣೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕದ ಕೇಂದ್ರ ಕಛೇರಿಯಲ್ಲಿ ೫೫ನೇ ಗಣರಾಜ್ಯ ದಿನಾಚರಣೆಯನ್ನು ಸಡಗರ ಸಂಭ್ರಮಗಳೊಂದಿಗೆ ಆಚರಿಸಲಾಯಿತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರ ಧ್ವಜಾರೋಹಣ ಮಾಡಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳನ್ನುದ್ದೇಶಿಸಿ ಮಾತನಾಡಿದರು. ಜೊತೆಯಲ್ಲಿ ರಾಜ್ಯ ಆಯುಕ್ತರಾದ (ಗೈ) ಶ್ರೀಮತಿ ಎಂ.ಜಿ. ಬೋಪಯ್ಯನವರು, ರಾಜ್ಯ ಖಜಾಂಚಿಗಳಾದ ಪ್ರೊ. ಎಂ. ಸೂರ್ಯನಾರಾಯಣಪ್ಪ ಮತ್ತು ಇತರ ಪದಾಧಿಕಾರಿಗಳು ಉಪಸ್ಥಿತರಿದ್ದರು. ೩೦೦ ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್‌ಬುಲ್ಸ್, ದಳನಾಯಕರುಗಳು ಮತ್ತು ಪೋಷಕರುಗಳು ಈ ಸಮಾರಂಭದಲ್ಲಿ ಪಾಲ್ಗೊಂಡಿದ್ದರು.

ಈ ಸಂದರ್ಭದಲ್ಲಿ ವಿವಿಧ ಶಾಲಾ ಮಕ್ಕಳಿಂದ ಸಾಂಸ್ಕೃತಿಕ ಕಾರ್ಯಕ್ರಮ ನಡೆಯಿತು.




ರಾಜ್ಯಕೇಂದ್ರ ಕಛೇರಿಯಲ್ಲಿ ಧ್ವಜಾರೋಹಣ

# ಜಿಲ್ಲೆಗಳಲ್ಲಿ ಗಣರಾಜ್ಯೋತ್ಸವ

ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾಡಳಿತ ವತಿಯಿಂದ ಏರ್ಪಡಿಸಿದ್ದ ೫೫ನೇ ಗಣರಾಜ್ಯೋತ್ಸವ ಸಮಾರಂಭ ಜರುಗಿತು ಆಯಾ ಜಿಲ್ಲೆಯ ಸ್ಕೌಟ್ಸ್ ಗೈಡ್ಸ್‌ಗಳು ಭಾಗವಹಿಸಿ ಅನೇಕ ಜಿಲ್ಲೆಗಳಲ್ಲಿ ಪಥ ಸಂಚಲನಕ್ಕಾಗಿ ಬಹುಮಾನ ಪಡೆದಿರುತ್ತಾರೆ.






ಸಾಂಸ್ಕೃತಿಕ ಕಾರ್ಯಕ್ರಮ ದಲ್ಲಿ ಸ್ಕೌಟ್ಸ್, ಗೈಡ್ಸ್

ಕಾರ್ಯಕ್ರಮದಲ್ಲಿ ಪಾಲ್ಗೊಂಡ ಪೋಷಕರು








ಕಾರ್ಯಕ್ರಮ ದಲ್ಲಿ ಭಾಗವಹಿಸಿದ ಸ್ಕೌಟ್ಸ್, ಗೈಡ್ಸ್‌ಗಳು



## ರಾಜ್ಯ ಮಟ್ಟದ ಗೀತ ಗಾಯನ ಶಿಬಿರ

ದಿನಾಂಕ ೧೭.೦೧.೨೦೦೪ ರಿಂದ ೨೧.೦೧.೨೦೦೪ ರವರೆಗೆ ಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರದಲ್ಲಿ ಗೀತಗಾಯನ ಶಿಬಿರ ನಡೆಯಿತು. ಶ್ರೀಮತಿ ರವಿ ವೆಸ್ಲಿ ಎಲ್.ಟಿ.(ಜಿ), ಸ್ಥಾನಿಕ ಆಯುಕ್ತರು (ತರಬೇತಿ) ನಾಯಕರಾಗಿದ್ದರು. ೨೩ ಜನ ಶಿಬಿರಾರ್ಥಿಗಳು ಭಾಗವಹಿಸಿದ್ದರು.

## ಪುನಶ್ಚೇತನ ತರಬೇತಿ ಶಿಬಿರ

ದಿನಾಂಕ ೧೭ ರಿಂದ ೨೧.೦೧.೨೦೦೪ರವರೆಗೆ ಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರದಲ್ಲಿ ಪುನಶ್ಚೇತನ ತರಬೇತಿ ಶಿಬಿರ ನಡೆಯಿತು. ೧೩ ಜನ ವೃಕ್ಷಮಣಿದಾರಕರು ಭಾಗವಹಿಸಿದ್ದರು ಶ್ರೀ ಮಾಧವ ಸಿಂಗ್. ಎಲ್.ಟಿ.(ಸಿ) ನಾಯಕರಾಗಿದ್ದರು.

## ಆಯುಕ್ತರುಗಳ ಮೂಲ ತರಬೇತಿ ಶಿಬಿರ

ದಿನಾಂಕ ೨೪.೦೧.೨೦೦೪ ರಿಂದ ೦೧.೦೨.೨೦೦೪ ರವರೆಗೆ ಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರದಲ್ಲಿ ಆಯುಕ್ತರುಗಳ ಮೂಲ ತರಬೇತಿ ಶಿಬಿರ ನಡೆಯಿತು. ಶ್ರೀ ಟಿ.ಎಸ್. ಲೂಕಾಸ್, ಎಲ್.ಟಿ.(ಎಸ್) ಸಹಾಯಕ ರಾಜ್ಯ ಆಯುಕ್ತರು (ಯೋಜನೆ ಮತ್ತು ಅಭಿವೃದ್ಧಿ) ನಾಯಕರಾಗಿದ್ದರು. ೩೭ ಶಿಬಿರಾರ್ಥಿಗಳು ಭಾಗವಹಿಸಿದ್ದರು. ಈ ಪೈಕಿ ೪ ಜನ ಕ್ಷೇತ್ರ ಶಿಕ್ಷಣಾಧಿಕಾರಿಗಳು ಗದಗ್ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಿಂದ ಭಾಗವಹಿಸಿದ್ದರು.

## ಜಿಲ್ಲಾ ಮಟ್ಟದ ಸ್ಕೌಟ್ ಮತ್ತು ಗೈಡ್ ಪದಾಧಿಕಾರಿಗಳ ಶಿಬಿರ

ದಿನಾಂಕ ೨೪.೦೧.೨೦೦೪ ರಿಂದ ೦೧.೦೨.೨೦೦೪ ರವರೆಗೆ ಜಿಲ್ಲಾ ಮಟ್ಟದ ಸ್ಕೌಟ್ ಮತ್ತು ಗೈಡ್ಸ್ ಅಧಿಕಾರಿಗಳ ಶಿಬಿರ ಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರದಲ್ಲಿ ಜರುಗಿತು. ಶ್ರೀ ಎಂ.ಎಂ. ಲೋಂಡೆ ಎಲ್.ಟಿ(ಎಸ್) ನಾಯಕರಾಗಿದ್ದರು. ೧೨ ಶಿಬಿರಾರ್ಥಿಗಳು ಭಾಗವಹಿಸಿದ್ದರು. ಮೇಲ್ಕಂಡ ಎಲ್ಲಾ ಶಿಬಿರಗಳಿಗೆ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಶ್ರೀಮತಿ ಎಂ.ಜಿ. ಬೋಪಯ್ಯ, ರಾಜ್ಯ ಆಯುಕ್ತರು (ಗೈಡ್) ಮತ್ತು ಪ್ರೊ. ಎಂ. ಸೂರ್ಯನಾರಾಯಣಪ್ಪ, ರಾಜ್ಯ ಖಜಾಂಚಿಗಳು ಭೇಟಿ ನೀಡಿದ್ದರು.

## ಸ್ಕೌಟ್-ಗೈಡ್ ಎಂದರೆ .....

### ವಯಸ್ಕರಿಗೆ ಒಂದು ಸವಾಲು

**ಯುವಜನಾಂಗಕ್ಕೆ ಒಂದು ಅವಕಾಶ. ತಲೆಮಾರುಗಳ ಮಧ್ಯೆ ತಿಳುವಳಿಕೆಯನ್ನು ಉತ್ತಮಪಡಿಸಿಕೊಳ್ಳುವ ಒಂದು ಮಾರ್ಗ. ವಯಸ್ಕ ನಾಯಕರು ತಮ್ಮ ಸೇವೆಯಲ್ಲಿ ಮೌಲಿಕವಾದ ತರಬೇತಿ ಮತ್ತು ಅನುಭವ ಪಡೆಯುತ್ತಾರೆ. ಇದರಿಂದ ಅವರ ವೈಯಕ್ತಿಕ ವಿಕಾಸಕ್ಕೂ ಅನುಕೂಲವಾಗುತ್ತದೆ.**



# Spirit of Adventure Held at Sangam

***Pune :*** *An International event of WAGGGS "'Spirit of Adventure' was held at Sangam (WAGGGS) world Centre, Pune from 14th - 23rd January 2004. 20 Guide Leaders from India, Australia along with Staffs from U.K. Japan, CANADA, U.S.A. & Ireland attended this event. Smt. Geetha Nataraj, Asst. State Commissioner (Guide) Miss N.K. Chaya, Dist Training Commissioner (Guide) Tumkur, attended the event from Karnataka.*

*The Programme Wonderfully integrated the Cultural exchange for the Australians and Indian to learn the tradition, art, and culture of both Countries. Discussion and presentation on YOGA, intro to family and Coming to gether, Event orientation, Plan for overnight Trip, Panel on Indian Life, WAGGGS & you, Walk around the Neighbourhood were held.*

## Quiz 4 : On Scouting for Boys

1. *How many boys can form a Patrol ?*
2. *What is the object of patrol System ?*
3. *Why should a scout obey his patrol leader?*
4. *What do you mean by A patrol Leader has to lead his patrol ?*
5. *What is a patrol Leaders Council ?*
6. *Does the Scout Master has the right to vote in The Court of Honour ?*
7. *Can the 'Court of Honour' decide about the programme of work Camps and rewards, in the absence of Scout Master ?*
8. *Can all the decisions of C.O.H. be made public to all the members of the troop ?*
9. *The Patrols are named after .................. and ..................*
10. *Who holds the patrol Flag ?*

**Note :-** *For answers read Camp Fire yarn No. 4.)*

*By* ***Mohamed Wasil***
*Headquarters Commissioner (programme)*

# ಜಿಲ್ಲೆ ವಾರ್ತೆಗಳು

## ದಕ್ಷಿಣ ಕನ್ನಡ ಜಿಲ್ಲೆ



ಸ್ಥಳೀಯ ಸಂಸ್ಥೆಯು ದಶಮಾನೋತ್ಸವದ ಸಮಾರೋಪ ಸಮಾರಂಭ ರಾಜ್ಯ ಮುಖ್ಯ ಆಯುಕ್ತರು ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪರವರ ಅಧ್ಯಕ್ಷತೆಯಲ್ಲಿ ಜರುಗಿತು. ಚಿತ್ರದಲ್ಲಿ ಸ್ಥಳೀಯ ಸಂಸ್ಥೆ ಅಧ್ಯಕ್ಷ ಶ್ರೀ ಮೋಹನ್ ಶೆಟ್ಟಿ, ಜಿಲ್ಲಾ ಕಾರ್ಯದರ್ಶಿ ಶ್ರೀ ರಾಮಶೇಷ ಶೆಟ್ಟಿ, ಡಯಟ್‌ನ ಹಿರಿಯ ಉಪನ್ಯಾಸರ ಟಿ.ವಿ. ಮಹಿದಾಸ್, ಜಿಲ್ಲಾ ಆಯುಕ್ತರುಗಳಾದ ಎನ್.ಜಿ. ಮೋಹನ್, ಐರಿಸ್ ಡಿ'ಕುನ್ಹ, ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷರು ಕನ್ಯಾನ ಕೆ.ಪಿ. ಅಬ್ದುಲ್ ರಹಿಮಾನ್ ವೇದಿಕೆ ಉಪಸ್ಥಿತರಿದ್ದರು.

*ದಿನಾಂಕ 07.01.2004 ಮತ್ತು 08.01.2004 ರಂದು ಸ್ಥಳೀಯ ಸಂಸ್ಥೆ ವಿಟ್ಲ ಇವರ ಆಶ್ರಯದಲ್ಲಿ ಸ್ಕೌಟ್ ಮತ್ತು ಗೈಡ್ ಮೇಳ ಮತ್ತು ಕಬ್, ಬುಲ್‌ಬುಲ್ ಉತ್ಸವವು ಕನ್ಯಾನ ಹಿರಿಯ ಪ್ರಾಥಮಿಕ ಶಾಲೆ ಆವರಣದಲ್ಲಿ ನಡೆಯಿತು. ಈ ಮೇಳದಲ್ಲಿ 900 ಕಬ್ಸ್ ಬುಲ್‌ಬುಲ್ಸ್ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ಈ ಮೇಳದ ಅಂಗವಾಗಿ "ತ್ರಿದಳ" ನೆನಪಿನ ಸಂಚಿಕೆಯನ್ನು ಬಿಡುಗಡೆ ಮಾಡಲಾಯಿತು.*

### ಸ್ಕೌಟ್ಸ್ ಗೈಡ್ ಮೇಳ - ಕಬ್ಸ್ ಬುಲ್‌ಬುಲ್ಸ್ ಉತ್ಸವ 'ಬೆಳ್ತಂಗಡಿ'

*ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ - ಬೆಳ್ತಂಗಡಿ ಇದರ ವತಿಯಿಂದ ದಿನಾಂಕ 05-02-2004ನೇ ಗುರುವಾರ ಒಂದು ದಿನದ ತಾಲೂಕು ಮಟ್ಟದ ಬೃಹತ್ ಸ್ಕೌಟ್ಸ್ ಗೈಡ್ಸ್ ಮೇಳ ಮತ್ತು ಕಬ್ಸ್ ಬುಲ್‌ಬುಲ್ಸ್ ಉತ್ಸವವನ್ನು ಯಶಸ್ವಿಯಾಗಿ ನಡೆಸಲಾಯಿತು.*

*ಪ್ರಾರಂಭದಲ್ಲಿ ಧ್ವಜಾರೋಹಣ, ಕಬ್ಸ್ ಬುಲ್‌ಬುಲ್ಸ್ ಗ್ರೀಟಿಂಗ್ಸ್ ಬಳಿಕ ರೇ ಫಾ ।। ಜೆರಾಲ್ಡ್ ಡಿ.ಸೋಜ ಧರ್ಮಗುರುಗಳು ಹೋಲಿ ರಿಡಿಮರ್ ಚರ್ಚ್ - ಬೆಳ್ತಂಗಡಿ ಇವರು ತಮ್ಮ ಶುಭ ಸಂದೇಶದ ಮೂಲಕ ಮೇಳವನ್ನು ಉದ್ಘಾಟಿಸಿದರು. ಮಾದರಿ ಕೃತಿಯ ತಯಾರಿ, ಗ್ರೀಟಿಂಗ್ಸ್ ತಯಾರಿ, ಗ್ರಹಣ ಶಕ್ತಿಯ ಆಟಗಳು, ದೇಶಭಕ್ತಿ ಗೀತೆ ರಾಷ್ಟ್ರ ಧ್ವಜದ ಚಿತ್ರ ರಚನೆ, ಕಾಗದಗಳಿಂದ ಹೂಗಳು ತಯಾರಿ ಜಾನಪದ ಉತ್ಸವ ಹೀಗೆ ವಿವಿಧ ಚಟುವಟಿಕೆಗಳು ಮಕ್ಕಳನ್ನು ಹುರಿದುಂಬಿಸುತಿದ್ದವು.*

*ಈ ಮೇಳದಲ್ಲಿ ಸುಮಾರು 1200 ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್‌ಬುಲ್ಸ್ ಹಾಗೂ ಸುಮಾರು 150 ಶಿಕ್ಷಕ ಶಿಕ್ಷಕಿಯರು ಭಾಗವಹಿಸಿದ್ದು ಮೇಳದ ಯಶಸ್ವಿಗೆ ಕಾರಣವಾಯಿತು. ಬೆಳ್ತಂಗಡಿ ತಾಲೂಕು ಪಂಚಾಯತ್ ಅಧ್ಯಕ್ಷರಾದ ಶ್ರೀಮತಿ ಲೀಲಾವತಿ ಇವರ ಅಧ್ಯಕ್ಷತೆಯಲ್ಲಿ ಸಮಾರೋಪ ಸಮಾರಂಭವು ನಡೆಯಿತು. ಕು।। ವೀಣಾ*

ಅಧ್ಯಕ್ಷರು ನಗರ ಪಂಚಾಯತ್ ಬೆಳ್ತಂಗಡಿ, ಶ್ರೀಮತಿ ಹೇಮಾವತಿ ಉಪಾಧ್ಯಕ್ಷೆ ತಾಲೂಕು ಪಂಚಾಯಿತ್ ಬೆಳ್ತಂಗಡಿ, ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಎನ್.ಜಿ. ಮೋಹನ್, ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ರಾಮಶೇಷ ಶೆಟ್ಟಿ, ಶಿಕ್ಷಣಾಧಿಕಾರಿಯವರಾದ ಶ್ರೀ ಶೇಷ ಶಯನ ಕಾರಿಂಜೆ ಸಮಾರಂಭದಲ್ಲಿ ಉಪಸ್ಥಿತರಿದ್ದು ಶುಭ ಹಾರೈಸಿದರು.

**ಉಪ್ಪಿನಂಗಡಿ ಸ್ಥಳೀಯ ಸಂಸ್ಥೆಯ ಸ್ಕೌಟ್ಸ್-ಗೈಡ್ಸ್ ರ್‍ಯಾಲಿ ಕಬ್ಸ್, ಬುಲ್‌ಬುಲ್ಸ್ ಉತ್ಸವ ದಿನಾಂಕ 02.01.2004 ರಿಂದ 03.01.2004ರ ವರೆಗೆ ಸ್ಯೆಂಟ್ ಜಾರ್ಜ್ ಪದವಿ ಪೂರ್ವಕಾಲೇಜು ನೆಲ್ಯಾಡಿಯಲ್ಲಿ ನಡೆಸಲಾಯಿತು**

ರ್‍ಯಾಲಿಯ ಉದ್ಘಾಟನಾ ಸಮಾರಂಭವು ಜಿಲ್ಲಾ ಸ್ಕೌಟ್ಸ್ ಆಯುಕ್ತರು ಶ್ರೀ ಎನ್.ಜಿ. ಮೋಹನ್‌ರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ರಘುನಾಥ ರೈ ಉಪಾಧ್ಯಕ್ಷರು ತಾಲೂಕು ಪಂಚಾಯತ್ ಸಮಿತಿ ಪುತ್ತೂರು ಇವರು ರ್‍ಯಾಲಿಯನ್ನು ಉದ್ಘಾಟಿಸಿದರು. ಶ್ರೀಮತಿ ಐರಿನ್ ಡಿ'ಕುನ್ಹ, ಜಿಲ್ಲಾ ಆಯುಕ್ತರು ಗೈಡ್ಸ್, ಶ್ರೀ ವಾಲ್ಟರ್ ಡಿ'ಮೆಲ್ಲೊ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಪುತ್ತೂರು, ರೆ|| ಫಾ|| ಪಿ.ಜೆ. ಜೇಕಬ್, ಸಂಚಾಲಕರು. ಸಂತ ಜಾರ್ಜ್ ಪದವಿ ಪೂರ್ವ ಕಾಲೇಜು ನೆಲ್ಯಾಡಿ, ಬಿ. ರಘುನಾಥ ಬಾಗೇನಾಡಿ ತಾಲೂಕು ದೈಹಿಕ ಶಿಕ್ಷಣಾಧಿಕಾರಿಗಳು ಅತಿಥಿಗಳಾಗಿ ಭಾಗವಹಿಸಿದ್ದರು. ಸಮಾರೋಪ ಸಮಾರಂಭ ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಯು.ಎಸ್.ಎ. ನಾಯಕ ಅಧ್ಯಕ್ಷತೆಯಲ್ಲಿ ಜರುಗಿತು.

ನಗರ ಮೆರವಣಿಗೆಯನ್ನು ಶ್ರೀ ಎ.ಜೆ. ನಾಯಕ್ ಪ್ರಭಂಧಕರು ಕೆನರಾ ಬ್ಯಾಂಕ್ ನೆಲ್ಯಾಡಿ ಇವರು ಉದ್ಘಾಟಿಸಿದರು. ಭವ್ಯ ಶಿಬಿರಾಗ್ನಿಯನ್ನು ರೆ|| ಫಾ|| ಮ್ಯಾಥ್ಯೂ ವೋಡೆಯಲ್ ಪ್ರಾಚಾರ್ಯರು ಜ್ಞಾನೋದಯ ಬೆಥನಿ ಆಂಗ್ಲ ಮಾ. ಶಾಲೆ. ನೆಲ್ಯಾಡಿ ಇವರು ಉದ್ಘಾಟಿಸಿದರು.

## ಬಂಟ್ವಾಳ ದಕ್ಷಿಣ ಕನ್ನಡ ಜಿಲ್ಲೆ



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಬಂಟ್ವಾಳ ಸ್ಥಳೀಯ ಸಂಸ್ಥೆಯ ಸ್ಕೌಟ್ಸ್ ಗೈಡ್ಸ್ ರ್‍ಯಾಲಿ ಕಬ್ಸ್ ಬುಲ್‌ಬುಲ್ಸ್ ಉತ್ಸವದ ಸಮಾರೋಪ ಸಮಾರಂಭದಲ್ಲಿ ತಾಲೂಕು ಪಂಚಾಯಿತ್ ಅಧ್ಯಕ್ಷ ಶ್ರೀ ಸುದರ್ಶನ್ ಜೈನ್ ಅಧ್ಯಕ್ಷತೆಯನ್ನು ವಹಿಸಿ ಮಾತನಾಡುತ್ತಿರುವುದುತ್ತಿರುವುದು ಸ್ಥಳೀಯ ಸಂಸ್ಥೆ ಅಧ್ಯಕ್ಷ ಡಾ|| ವಸಂತಬಾಳಿಗ, ಎಸ್.ಎ.ಎಸ್. ಕಾಲೇಜಿನ ಪ್ರಂಶುಪಾಲ ಶ್ರೀ ಶಂಕರ್‌ಭಟ್, ಜಿಲ್ಲಾ ಕಾರ್ಯದರ್ಶಿ ರಾಮಶೇಷ ಶೆಟ್ಟಿ ರೋನಾಲ್ಡ ಮೋರಸ್ ಇವರುಗಳನ್ನು ಕಾಣಬಹುದು. ಈ ಕಾರ್ಯಕ್ರಮದಲ್ಲಿ 800 ಸ್ಕೌಟ್ಸ್ ಮತ್ತು ಗೈಡ್ಸ್ ಭಾಗವಹಿಸಿದ್ದರು.

## ಸುರತ್ಕಲ್‌ನಲ್ಲಿ ಸ್ಕೌಟ್ಸ್ ಗೈಡ್ಸ್ ಜಿಲ್ಲಾ ಮೇಳ



ದಿನಾಂಕ 9, 10, 11 ಜನವರಿ 2004ರ ವರೆಗೆ ದಕ್ಷಿಣ ಕನ್ನಡ ಜಿಲ್ಲಾ ರ್‍ಯಾಲಿಯು ಶ್ರೀ ವಿದ್ಯಾ ದಾಯಿಮಿ ಪ್ರೌಢಶಾಲೆ ಸುರತ್ಕಲ್‌ನಲ್ಲಿ ನಡೆಯಿತು. ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ರ್‍ಯಾಲಿಯನ್ನು ಉದ್ಘಾಟಿಸಿದರು. ಚಿತ್ರದಲ್ಲಿ ಇತರ ಪದಾಧಿಕಾರಿಗಳನ್ನು ಕಾಣಬಹುದು. 1,400 ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್‌ಬುಲ್ಸ್ ಮಕ್ಕಳು ಭಾಗವಹಿಸಿದ್ದರು.

*ಶ್ರೀ ಬಿ.ಆರ್. ವೇಣುಗೋಪಾಲ ಕೃಷ್ಣರವರು ಉಪಸ್ಥಿತರಿದ್ದರು. ದಿನಾಂಕ 03.01.2004 ರಂದು ಸಂಜೆ 7.30ಕ್ಕೆ ಭವ್ಯ ಶಿಭಿರಾಗ್ನಿ ನೆರವೇರಿಸಲಾಯಿತು. ದಿನಾಂಕ 04.01.2004ರ ಬೆಳಿಗ್ಗೆ 7.30ಕ್ಕೆ ಸರ್ವಧರ್ಮ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ನಡೆಯಿತು. ಬೆಳಿಗ್ಗೆ 9.00 ಗಂಟೆಗೆ ಧ್ವಜಾರೋಹಣ ನೆರವೇರಿತು ನಂತರ ವಿದ್ಯಾರ್ಥಿಗಳಿಗಾಗಿ ಹಲವಾರು ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. (ರಂಗೋಲಿ, ಮೆಹಂದಿ, ಚಿತ್ರಕಲೆ, ಕಸದಿಂದ ರಸ, ಮಾದರಿಗಳು, ರಸಪ್ರಶ್ನೆ) ಈ ಸ್ಪರ್ಧೆಗಳನ್ನು ನಡೆಸಲಾಯಿತು.*

## ತುಮಕೂರು ಜಿಲ್ಲೆ

*ದಿನಾಂಕ 03.01.2004 ಮತ್ತು 04.01.2004 ರಂದು ಎರಡು ದಿನಗಳವರೆಗೆ ಸಿದ್ಧಾರ್ಥ ಪ್ರೌಢಶಾಲೆ ಸಿದ್ಧಾರ್ಥನಗರ ತುಮಕೂರು ಇಲ್ಲಿ ರ್‍ಯಾಲಿ ನಡೆಸಲಾಯಿತು. ನಗರದ 22 ಶಾಲೆಗಳಿಂದ 300 ಸ್ಕೌಟ್ಸ್, 180 ಗೈಡ್ಸ್, 150 ಕಬ್ಸ್ ಮತ್ತು ಬುಲ್‌ಬುಲ್ಸ್ ಒಟ್ಟು 630 ವಿದ್ಯಾರ್ಥಿಗಳು ಭಾಗವಹಿಸಿದ್ದರು. 2.30ಕ್ಕೆ ಉದ್ಘಾಟನಾ ಸಮಾರಂಭ. ಉದ್ಘಾಟನೆಯನ್ನು ಸಿದ್ಧಾರ್ಥ ಸಂಸ್ಥೆ ಕಾರ್ಯದರ್ಶಿಗಳಾದ ಡಾ|| ಶಿವಪ್ರಸಾದ್‌ರವರು ಇವರು ನೆರವೇರಿಸಿದರು. ಸಮಾರಂಭದ ಅಧ್ಯಕ್ಷತೆಯನ್ನು ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀಮತಿ ನಾಗರತ್ನಮ್ಮ ವಹಿಸಿದ್ದರು. ಮುಖ್ಯ ಅತಿಥಿಗಳಾದ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಆಶಾ ಪ್ರಸನ್ನಕುಮಾರ್ ಹಾಗು*

## ಕೋಲಾರ ಉತ್ತರ ಜಿಲ್ಲೆ

*ಶಿಡ್ಲಘಟ್ಟ ಪಟ್ಟಣದ ಮಹಬೂಬ್ ನಗರದ ಸರ್ಕಾರಿ ಉರ್ದು ಕಿರಿಯ ಪ್ರಾಥಮಿಕ ಶಾಲೆಯ ಸ್ಕೌಟ್ ತಂಡ ದಿನಾಂಕ 26.01.2004 ರಂದು ಗಣರಾಜ್ಯ ದಿನ ಪೆರೇಡ್‌ನಲ್ಲಿ ಭಾಗವಹಿಸಿ ಮೊದಲನೆಯ ಬಹುಮಾನವನ್ನು ಪಡೆದಿದೆ.*

## ಚಿಕ್ಕಮಗಳೂರು ಜಿಲ್ಲೆ

*ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಿಕ್ಕಮಗಳೂರು ಜಿಲ್ಲಾ ಸಂಸ್ಥೆಯ ವತಿಯಿಂದ ಜಿಲ್ಲಾ ಮಟ್ಟದ ತೃತೀಯ ಸೋಪಾನ ಹಾಗೂ ಕಬ್ಸ್‌ಗಳ ತೃತೀಯ ಚರಣ ಹಾಗೂ ಬುಲ್‌ಬುಲ್ಸ್‌ಗಳಿಗೆ ಸುವರ್ಣ ಪಂಕ್ ತರಬೇತಿ ಶಿಬಿರವನ್ನು ದಿನಾಂಕ 07.02.2004 ರಂದು ಶನಿವಾರ ಚಿಕ್ಕಮಗಳೂರು ಜಿಲ್ಲಾ ಸ್ಕೌಟ್ ಭವನದಲ್ಲಿ ಏರ್ಪಡಿಸಲಾಗಿತ್ತು.*

ಈ ಶಿಬಿರದಲ್ಲಿ ಒಟ್ಟು 237 ಶಿಬಿರಾರ್ಥಿಗಳು ಜಿಲ್ಲಾದ್ಯಂತ ಭಾಗವಹಿಸಿದ್ದರು. ಶಿಬಿರದ ನಾಯಕ ನಾಯಕಿಯರಾಗಿ, ಶ್ರೀ ಸಿ.ಇ. ಮಂಜುನಾಥ್, ಹೆಚ್.ಡಬ್ಲೂ.ಬಿ.(ಎಸ್), ಶ್ರೀಮತಿ ಸಂಧ್ಯಾರಾಣಿ, ಎ.ಎಲ್.ಟಿ.(ಸಿ), ಶ್ರೀಮತಿ ಜಯಲಕ್ಷ್ಮಿ ಹೆಚ್.ಡಬ್ಲೂ.ಟಿ. (ಬಿ), ಶ್ರೀಮತಿ ಸುಪ್ರಿಯಾ ಕಿರಣ್ (ಜಿ) ಇವರುಗಳು ಕಾರ್ಯನಿರ್ವಹಿಸಿದರು. ಸಹಾಯಕರಾಗಿ ಶ್ರೀ ಎಲ್.ಟಿ. ಲೋಕೇಶ್ ಎ.ಎಸ್.ಓ.ಸಿ. (ಸ್ಕೌಟ್), ಶ್ರೀಮತಿ ವಾಸಂತಿ ಕಾರ್ಯ ನಿರ್ವಹಿಸಿದರು. ಶ್ರೀ ಎಂ.ಎನ್. ಷಡಾಕ್ಷರಿ, ಜಿಲ್ಲಾ ಆಯುಕ್ತರು (ಸ್ಕೌಟ್) ಇವರು ಶಿಬಿರಕ್ಕೆ ಭೇಟಿ ನೀಡಿ. ಸ್ಕೌಟ್ಸ್-ಗೈಡ್ಸ್‌ಗಳಿಗೆ ಕಂಪಾಸ್ ಮತ್ತು ಮ್ಯಾಪಿಂಗ್ ವಿಷಯವಾಗಿ ತರಬೇತಿ ನೀಡಿದರು. ಈ ಶಿಬಿರದಲ್ಲಿ ಶೃಂಗೇರಿ, ಕೊಪ್ಪ, ಮೂಡಿಗೆರೆ ಹಾಗೂ ಚಿಕ್ಕಮಗಳೂರು ತಾಲ್ಲೂಕುಗಳಿಂದ ಶಿಬಿರಾರ್ಥಿಗಳು ಭಾಗವಹಿಸಿದ್ದರು.

## ಕೊಪ್ಪ ತಾಲ್ಲೋಕ್

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕೊಪ್ಪ ತಾಲ್ಲೂಕು ಸ್ಥಳೀಯ ಸಂಸ್ಥೆಯ ವತಿಯಿಂದ ಹಾಗೂ ಲಯನ್ಸ್ - ಲಯನೆಸ್ ಸಂಸ್ಥೆಯ ಸಂಯುಕ್ತ ಆಶ್ರಯದಲ್ಲಿ ದಿನಾಂಕ 13.02.2004 ರಂದು ಕೊಪ್ಪ ತಾಲ್ಲೋಕ್ ಹರಿಹರ ಪುರದಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜು ಆವರಣದಲ್ಲಿ ತಾಲ್ಲೋಕು ಮಟ್ಟದ ಸ್ಕೌಟ್ಸ್-ಗೈಡ್ಸ್ ಕಬ್ಸ್-ಬುಲ್‌ಬುಲ್ಸ್ ಮೇಳ ನಡೆಯಿತು.

ಈ ರ್‍ಯಾಲಿಯಲ್ಲಿ ತಾಲ್ಲೋಕಿನಾದ್ಯಂತ 300 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ಮಕ್ಕಳು ಭಾಗವಹಿಸಿದ್ದರು. ಸಿಸ್ಟಿರ್ ಸಿಂಥಿಯಾ, ಎಲ್.ಟಿ.(ಜಿ) ಇವರು ರ್‍ಯಾಲಿಯ ನಾಯಿತತ್ವ ವಹಿಸಿದ್ದರು.

ರ್‍ಯಾಲಿಯ ಉದ್ಘಾಟನೆಯನ್ನು ಶ್ರೀಮತಿ ಸುಮಿತ್ರ ನಾರಾಯಣ ಅಧ್ಯಕ್ಷರು, ಗ್ರಾಮ ಪಂಚಾಯ್ತಿ, ಹರಿಹರ ಪುರ ಇವರು ನೆರವೇರಿಸಿ ಸ್ಕೌಟ್ ಸಂಸ್ಥೆಯ ಚಟುವಟಿಕೆಗಳು ಗ್ರಾಮೀಣ ಪ್ರದೇಶದ ಮಕ್ಕಳಿಗೆ ಹೆಚ್ಚು ವಿಸ್ತಾರವಾಗಬೇಕೆಂದು ಕರೆನಿಡಿದರು. ಶ್ರೀಮತಿ ಶೈಲ ಲಯನ್ಸ್ ಕ್ಲಬ್ ಅಧ್ಯಕ್ಷರು ಸಮಾರಂಭದಲ್ಲಿ ಉಪಸ್ಥಿತರಿದ್ದರು. ಮುಖ್ಯ ಅತಿಥಿಗಳಆಗಿ ಶ್ರೀ ಕೆ.ಎಂ. ಗೋಪಾಲಕೃಷ್ಣ ಸಂಯೋಜಕರು, ದೈಹಿಕ ಶಿಕ್ಷಣ ಇವರು ಮುಖ್ಯ ಅತಿಥಿಗಳಾಗಿದ್ದರು.

ರ್‍ಯಾಲಿಯಲ್ಲಿ ಸರ್ವಧರ್ಮ ಪ್ರಾರ್ಥನೆ ಪಥಸಂಚಲನ, ಧ್ವಜಸ್ತಂಭ ನಿರ್ಮಾಣ, ಪ್ಲೇ ಆಕ್ಟಿಂಗ್ ತಾರಾಸ್ಟೋರಿ, ಅಭಿನಯ ಗೀತೆಗಳು, ಹ್ಯಾಂಡಿಕ್ರಾಪ್ಟ್, ಚಿತ್ರಕಲೆ, ಶಿಬಿರಾಗ್ನಿ ಕಾರ್ಯಕ್ರಮಗಳು ಜರುಗಿದವು.

ಸಂಜೆ 5 ಗಂಟೆಗೆ ರ್‍ಯಾಲಿಯ ಮುಕ್ತಾಯ ಸಮಾರಂಭ ನಡೆಯಿತು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ವಸಂತ ಆಕೀಲರು ಅಧ್ಯಕ್ಷರು. ಸ್ಥಳೀಯ ಭಾರತ್ ಸ್ಕೌಟ್ಸ್-ಗೈಡ್ಸ್ ಕೊಪ್ಪ ಇವರು ವಹಿಸಿದ್ದರು. ಶ್ರೀ ಎ.ಆರ್. ಜಯಪ್ರಾಶ್, ಸದಸ್ಯರು ತಾಲ್ಲೋಕು ಪಂಚಾಯ್ತಿ ಕೊಪ್ಪ, ಶ್ರೀ ಜೆ.ಎಸ್. ಶ್ರೀಕಂಠ ಅಧ್ಯಕ್ಷರು ಲಯನ್ಸ್ ಕ್ಲಬ್ ಕೊಪ್ಪ, ಉಪಸ್ಥಿತರಿದ್ದರು. ಶ್ರೀ ಕೆ.ಎಸ್. ಮಣಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಕೊಪ್ಪ, ಇವರು ಉಪಸ್ಥಿತರಿದ್ದು, ಸ್ಕೌಟ್ಸ್-ಗೈಡ್ಸ್ ಎಲ್ಲ ಶಾಲೆಗಳಲ್ಲಿ ಬೆಳೆಸಲು ಮತ್ತು ತರಬೇತಿ ಪಡೆದವರು ಕಡ್ಡಾಯವಾಗಿ ಶಾಲೆಗಳಲ್ಲಿ ಸ್ಕೌಟ್-ಗೈಡ್ಸ್ ಚಟುವಟಿಕೆಗಳನ್ನು ನಡೆಸಿಕೊಂಡು ಬರಲು ಕರೆನೀಡಿದರು. ಮತ್ತು ಹಿಂದುಳಿದ ಬಡ

ಮಕ್ಕಳಿಗೆ ಸ್ಕೌಟ್-ಗೈಡ್ ಸಮವಸ್ತ್ರವನ್ನು ಕೊಡಲು ಶಿಪಾರಸ್ಸು ಮಾಡುವುದಾಗಿ ತಿಳಿಸಿದರು. ಶ್ರೀ ಹೂವಪ್ಪಗೌಡ ಪ್ರಾಂಶುಪಾಲರು ಸರ್ಕಾರಿ ಪದವಿ ಪೂರ್ವ ಕಾಲೇಜು ಹರಿಹರಪುರ ಇವರು ಉಪಸ್ಥಿತರಿದ್ದು. ಸಂಸ್ಥೆಯ ಚಟುವಟಿಕೆಗಳಿಗೆ ಸಹಕಾರ ಮತ್ತು ಪ್ರೋತ್ಸಾಹ ನೀಡುವುದಾಗಿ ತಿಳಿಸಿದರು. ಶ್ರೀ ಎಲ್.ಟಿ. ಲೋಕೇಶ್ ಎ.ಎಸ್.ಓ.ಸಿ.(ಎಸ್) ಇವರು ಕಾರ್ಯಕ್ರಮ ಸಂಘಟಿಸಿದರು.

## ರಾಯಚೂರು ಜಿಲ್ಲೆ



ದಿನಾಂಕ 26.01.2004 ಗಣರಾಜ್ಯೋತ್ಸವದ ಪಥಸಂಚಲನದಲ್ಲಿ 300 ಜನ ಸ್ಕೌಟ್, ಗೈಡ್ಸ್, ಕಬ್ಸ್, ಬುಲ್‌ಬುಲ್ಸ್, ಮಕ್ಕಳು ಭಾಗವಹಿಸಿದ್ದರು. ಅತ್ಯುತ್ತಮವಾಗಿ ಪಥಸಂಚಲನ ಮಾಡಿದಂತಹ ಕಬ್ಸ್, ಬುಲ್‌ಬುಲ್ಸ್ ಮಕ್ಕಳಿಗೆ ಜಿಲ್ಲಾ ಉಸ್ತುವಾರಿ ಮಂತ್ರಿಗಳಾದ ಮಾನ್ಯ ಶ್ರೀ ರಾಜಅಮರೇಶ್ವರ ನಾಯಕ್ ಅವರು ಸನ್ಮಾನಿಸಿದರು.



ದಿನಾಂಕ 31.01.2004 ರಂದು ರಾಯಚೂರಿನಲ್ಲಿ ಜರುಗಿದ ರಾಜ್ಯ ಮಟ್ಟದ ದಾಸಸಾಹಿತ್ಯ ಸಮ್ಮೇಳನದ ಮೆರವಣಿಗೆಯಲ್ಲಿ 100 ಜನ ಸ್ಕೌಟ್ಸ್, ಗೈಡ್ಸ್ ಮಕ್ಕಳು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಬಸವವಿದ್ಯಾ ನಿಕೇತನ್ ಶಾಲೆಯ ಸ್ಕೌಟ್ಸ್, ಗೈಡ್ಸ್ ಮಕ್ಕಳು ದಾಸರ ವೇಷಭೂಷಣಗಳೊಂದಿಗೆ ಮೆರವಣಿಗೆಯಲ್ಲಿ ಭಾಗವಹಿಸಿ ಜನರ ಮೆಚ್ಚುಗೆಯನ್ನು ಪಡೆದರು.

# ಕೊಡಗು ಜಿಲ್ಲೆ



ಶ್ರೀಮತಿ ಸುಮವಂಸತ್, ಮುಜರಾಯಿ ಸಚಿವರು ದಿನಾಂಕ 26.01.2004 ರಂದು ಜಿಲ್ಲಾ ಮಟ್ಟದಲ್ಲಿ ನಡೆದ ಗಣರಾಜ್ಯ ದಿನ ಸಂದರ್ಭದಲ್ಲಿ ಶ್ರೀಮತಿ ಸಿ.ಎ. ಮೀನಾಕ್ಷಿ ಪೂಣಚ್ಚ, ಜಿಲ್ಲಾ ಮುಖ್ಯ ಆಯುಕ್ತರು ಇವರನ್ನು ಸನ್ಮಾನಿಸುತ್ತಿರುವುದು ಚಿತ್ರದಲ್ಲಿ ಶ್ರೀ ಶ್ರೀಕಾಂತ್ ವಾಲಗದ್, ಜಿಲ್ಲಾಧಿಕಾರಿ ಮತ್ತು ಶ್ರೀ ಮಹದೇವಯ್ಯ, ಜಿಲ್ಲಾ ಪಂಚಾಯಿತ್ ಮುಖ್ಯ ಕಾರ್ಯನಿರ್ವಾಣಾಧಿಕಾರಿ ಇವರನ್ನು ಚಿತ್ರದಲ್ಲಿ ಕಾಣಬಹುದು.

# ದಾವರಣಗೆರೆ ಜಿಲ್ಲೆ : ಟ್ರಾಫಿಕ್ ತರಬೇತಿ ಶಿಬಿರ



ಸಮುದಾಯ ಅಭಿವೃದ್ಧಿ ಶಿಬಿರ ಹಾಗೂ ಗುಂಪು ನಾಯಕರ ತರಬೇತಿ ಶಿಬಿರ ದಿನಾಂಕ 24-01-2004 ಮತ್ತು 25-01-2004 ರಂದು ದಾವಣಗೆರೆಯಲ್ಲಿ ನಡೆಯಿತು. 144 ಸ್ಕೌಟ್ಸ್, ಗೈಡ್ಸ್‌ಗಳು ಟ್ರಾಫಿಕ್ ತರಬೇತಿ ಶಿಬಿರ ಏರ್ಪಡಿಸಿದ್ದರು. ಶ್ರೀ ರವಿನಾರಾಯಣ್ ಪೋಲೀಸ್ ಡಿ.ವೈ.ಎಸ್.ಪಿ. ಶ್ರೀ ಜಗದೀಶ್ ಸರ್ಕಲ್ ಇನ್ಸ್‌ಪೆಕ್ಟರ್ ಶ್ರೀ ಸತೀಶ್ ಸರ್ಕಲ್ ಸಬ್‌ಇನ್ಸ್‌ಪೆಕ್ಟರ್ ಹಾಗೂ ಇತರ ಪೋಲೀಸ್ ಅಧಿಕಾರಿಗಳ ಸಹಕಾರದೊಂದಿಗೆ ಜರುಗಿತು. ಈ ಕಾರ್ಯಕ್ರಮವು ಶ್ರೀ ಮಹಮದ್ ವಾಸಿಲ್ ಕೇಂದ್ರ ಸ್ಥಾನಿಕ ಆಯುಕ್ತರು ಶ್ರೀ ಜಂಬಿಗಿ ಷರಣಪ್ಪ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಮುರುಗರಾಜೇಂದ್ರ ಚಿಟಗೇರಿ, ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀಮತಿ ಶಾಂತ ಯಾವಗಲ್, ಜಿಲ್ಲಾ ಗೈಡ್ ಆಯುಕ್ತರು, ಶ್ರೀ ಚೆನ್ನಬಸಪ್ಪ, ಜಿಲ್ಲಾ ಕಾರ್ಯದರ್ಶಿ ಇವರುಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

# ಹಾವೇರಿ ಜಿಲ್ಲೆ : ರಸ್ತೆ ಸುರಕ್ಷತಾ ಸಪ್ತಾಹ ರಾಣಿಬೆನ್ನೂನ್ನರು



ದಿನಾಂಕ 05.01.2004 ರಿಂದ 11.01.2004ರ ವರೆಗೆ ರಸ್ತೆ ಸುರಕ್ಷಾ ಸಪ್ತಾಹದ ಅಂಗವಾಗಿ ಸಂಚಾರಿ ಪೋಲೀಸ್ ಮತ್ತು ಸ್ಥಳೀಯ ಸಂಸ್ಥೆ ರಾಣಿಬೆನ್ನೂರು ಇವರ ಆಶ್ರಯದಲ್ಲಿ ಸಪ್ತಾಹವನ್ನು ಆಚರಿಸಲಾಯಿತು. ಟ್ರಾಫಿಕ್ ಸಿಗ್ನಲ್, ಪಥಸಂಚಲನ, ಚಿತ್ರಕಲಾ ಸ್ಪರ್ಧೆ ಇತ್ಯಾದಿ ಕಾರ್ಯಕ್ರಮ ನಡೆಯಿತು. ಉಪಾಧ್ಯಕ್ಷರಾದ ಡಾ|| ಶುಭಾಶ್‌ಚಂದ್ರಶೆಟ್ಟಿ, ಶ್ರೀ ಜಂಗಮಯ್ಯ ಡಿ.ವೈ.ಎಸ್.ಪಿ. ಹಾಗೂ ಇತರ ಪೋಲೀಸ್ ಅಧಿಕಾರಿಗಳು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು.

## ಬಾಗಲಕೋಟೆ ಜಿಲ್ಲೆ



ಶ್ರೀ ಎಂ.ಎಂ. ಆವಾರಿ ಉಪಾಧ್ಯಕ್ಷರು ಹುನಗುಂದ ತಾಲ್ಲೂಕು ಇವರು ದಿನಾಂಕ 26.01.2004 ರಂದು ಶ್ರೀ ವಿಜಯ ಮಹಾಂತೇಶ ಪ್ರೌಢಶಾಲೆ ಹುನಗುಂದದಲ್ಲಿ ಸ್ಕೌಟ್ ದಳವನ್ನು ಉದ್ಘಾಟಿಸಿದರು. ಚಿತ್ರದಲ್ಲಿ ಶಾಲಾ ಶಿಕ್ಷಕ ವೃಂದವನ್ನು ಕಾಣಬಹುದು



# ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

## ನಾಲ್ಕು ಜನರೊಂದಿಗೆ ಮಾತನಾಡುವಾಗ ನಿಮ್ಮ ವರ್ತನೆ ಹೀಗಿದ್ದರೆ ಚೆನ್ನ

- ಗೊತ್ತಿಲ್ಲದ ವಿಷಯದ ಬಗ್ಗೆ ಮಾತನಾಡಬಾರದು.
- ಬೇರೆಯವರು ಮಾತನಾಡುವಾಗ ಅರ್ಧಕ್ಕೆ ಬಾಯಿ ಹಾಕಬಾರದು.
- ಬೇರೆಯವರ ಮಾತನ್ನು ಕೇಳುವ ಸಹನೆ ಇರಬೇಕು.
- ನಮ್ಮ ಮಾತಿಗೆ ಅಲ್ಲಿ ಗೌರವ ಆದರ ಇರಬೇಕು.
- ವ್ಯಕ್ತಿಗತ ಟೀಕೆ, ನಿಂದನೆ ಸಲ್ಲದು.
- ಆಡುವ ಮಾತು ಬೇರೆಯವರ ಮನಸ್ಸನ್ನು ನೋಯಿಸುವಂತೆ ಇರಬಾರದು.
- ಮಾತನಾಡುವಾಗ ಸಮಯ ಪ್ರಜ್ಞೆ ಅವಶ್ಯಕ.
- ಸಂದರ್ಭಕ್ಕೆ ತಕ್ಕ ಮಾತುಗಳನ್ನಾಡಬೇಕು. ಅನಾವಶ್ಯಕ ಮಾತು ಬೇಡ.
- ಮಾತು ಸ್ಪಷ್ಟವಾಗಿರಬೇಕು. ಮಾತನಾಡುವಾಗ ಉಳಿದವರ ಪ್ರತಿಕ್ರಿಯೆ ಹೇಗಿರುತ್ತದೆ ಎಂದು ಗಮನಿಸಬೇಕು. ಮುಖ ಗಂಟಿಕ್ಕಿ ಮಾತನಾಡಬಾರದು.
- ಮಾತು ವಾದ ಮಾಡುವಂತಿರಬಾರದು. ಮಾತಿನಲ್ಲಿ ಅಹಂ ಇರಬಾರದು.
- ಮಾತನಾಡುವಾಗ ಸಂಕುಚಿತ ಮನೋಭಾವ ಬಿಟ್ಟು ಹೃದಯ ಶ್ರೀಮಂತಿಕೆ ತೋರಿಸಬೇಕು.
- ಮಾತು ತಿಳಿ ಹಾಸ್ಯದಿಂದ ಕೂಡಿದ್ದು ಸ್ನೇಹ ಪೂರ್ವಕವಾಗಿರಬೇಕು.
- ಆಡುವ ಪ್ರತಿ ಮಾತಿನಲ್ಲೂ ಆತ್ಮವಿಶ್ವಾಸ ಇರಬೇಕು.

ಸಂಗ್ರಹ :
**ಶ್ರೀ ವೀರೇಶಪ್ಪ**
ಕಾರ್ಯದರ್ಶಿ, ಸ್ಥಳೀಯ ಸಂಸ್ಥೆ, ಶಿವಮೊಗ್ಗ



## ಚಿರ ಸ್ಮರಣೆ

## ವಿಟ್ಲದ ಸ್ಕೌಟ್ ಮಾಸ್ಟರ್ ಬೊಳಿಯಣ್ಣ ಬಲ್ಲಾಳ್

*73ರ ಹರೆಯದ ಶ್ರೀ ಬಲ್ಲಾಳ್ ಅವರ ಸ್ಕೌಟ್ ಪ್ರೀತಿ ಅನುಪಮವಾದುದು. ಸುಮಾರು ಹದಿನೈದು ವರ್ಷ ಪ್ರಾಥಮಿಕ ಶಾಲೆಯಲ್ಲಿ ತನ್ನ ಶಿಕ್ಷಣ ಸೇವಾ ಅವಧಿಯಲ್ಲಿ ನೂರಾರು ವಿದ್ಯಾರ್ಥಿಗಳಿಗೆ ಸ್ಕೌಟ್ ಚಳವಳಿಯನ್ನು ಪರಿಚಯಿಸಿದರು. ಸ್ಕೌಟ್ ಅಧ್ಯಾಪಕರಾಗಿ ಹಲವಾರು ವಿದ್ಯಾರ್ಥಿಗಳನ್ನು ಸ್ಕೌಟರ್ ಆಗಿ ತರಬೇತಿಗೊಳಿಸಿದರು. ವೃತ್ತಿಯಿಂದ ನಿವೃತ್ತರಾದ ಅನಂತರ ಭಾರತ್ ಸ್ಕೌಟ್ ಗೈಡ್ ಕರ್ನಾಟಕ ಸಂಸ್ಥೆಯ ಸನ್ನದ್ದು ಪಡೆದು ಶ್ರೀ ಪಂಚಲಿಂಗೇಶ್ವರ ಮುಕ್ತ ಸ್ಕೌಟ್ ದಳವನ್ನು ಆರಂಭಿಸಿದರು. ಕಳೆದ ಹದಿನೈದು ವರ್ಷಗಳ ಶ್ರೀ ಪಂಚಲಿಂಗೇಶ್ವರ ಮುಕ್ತ ಸ್ಕೌಟ್ ದಳದ 12 ವಿದ್ಯಾರ್ಥಿಗಳು ಸ್ಕೌಟ್ ರಾಜ್ಯ ಪುರಸ್ಕಾರ ಮತ್ತು 22 ವಿದ್ಯಾರ್ಥಿಗಳು ರಾಷ್ಟ್ರಪತಿ ಪ್ರಶಸ್ತಿ ಪಡೆದಿದ್ದಾರೆ. ಎಂಟು ವಿದ್ಯಾರ್ಥಿಗಳು ರಾಜ್ಯ ಪುರಸ್ಕಾರ ಪ್ರಶಸ್ತಿ ಪಡೆದಿದ್ದಾರೆ. ಹಿಮಾಲಯ ವುಡ್‌ಬ್ಯಾಡ್ಜ್ ಹೊಂದಿರುವ ಶ್ರೀ ಬಲ್ಲಾಳ್ ಅವರು ದಕ್ಷಿಣಕನ್ನಡ ಜಿಲ್ಲಾ ಟ್ರೈನಿಂಗ್ ಕೌನ್ಸಿಲರಾಗಿದ್ದಾರೆ. ಅವರು ಅತ್ಯಧಿಕ ಸಂಸ್ಥೆಯಲ್ಲಿ ರಾಜ್ಯ ಪುರಸ್ಕಾರ ಮತ್ತು ರಾಷ್ಟ್ರಪತಿ ಸ್ಕೌಟ್ ಆಗಲು ತರಬೇತಿ ನೀಡಿದುದನ್ನು ಮತ್ತು ಸ್ಕೌಟ್ ಚಳವಳಿಯಲ್ಲಿ ಅವರು 25 ವರ್ಷಗಳ ಅವಿರತ ಸೇವೆಯನ್ನು ಪರಿಗಣಿಸಿ ಭಾರತ್ ಸ್ಕೌಟ್ ಗೈಡ್ ರಾಜ್ಯ ಸಂಸ್ಥೆಯು 20 ವರ್ಷಗಳ ಸೇವಾ ಪದಕವನ್ನು ನೀಡಿ ಗೌರವಿಸಿದೆ. ದಿನಾಂಕ 19.06.2003 ರಂದು ಬೆಂಗಳೂರಿನ ರಾಜಭವನದ ಗಾಜಿನ ಮನೆಯಲ್ಲಿ ಜರುಗಿದ ರಾಜ್ಯ ಪುರಸ್ಕಾರ ಪದಕ ವಿತರಣಾ ಸಮಾರಂಭದಲ್ಲಿ ಮೈಸೂರು ವಿಭಾಗದ ಅತ್ಯುತ್ತಮ ಸ್ಕೌಟ್ ಶಿಕ್ಷಕರೆಂದು ಸನ್ಮಾನ್ಯ ರಾಜ್ಯಪಾಲರಿಂದ ಸನ್ಮಾನಿತಗೊಂಡರು. ದಿನಾಂಕ 28.01.2004 ರಂದು ವಿಟ್ಲದಲ್ಲಿ ಹೃದಯಾಘಾತದಿಂದ ನಿಧನ ಹೊಂದಿದರು. ಅವರ ಆತ್ಮಕ್ಕೆ ಚಿರಶಾಂತಿ ದೊರಕಲೆಂದು ಭಾಗವಂತನಲ್ಲಿ ಪ್ರಾರ್ಥಿಸುತ್ತೇವೆ. ಅವರ ಬಂಧು ಬಳಗದವರಿಗೆ ದಯಮಯನಾದ ಭಾಗವಂತನು ಈ ದುಃಖವನ್ನು ಭಾರಿಸುವ ಶಕ್ತಿ ಕೊಡಲೆಂದು ಪ್ರಾರ್ಥಿಸುತ್ತೇವೆ.*

---

## Bangalore North
## District Level Cub & Bulbul Revel

*The Bangalore North District Conducted the District level Cub & Bulbul Revel on 1st February 2004 at Daffodils English School prenises, Sanjayanagar, Bangalore.*

*Nearly 400 Cubs, Bulbuls & Unit leaders drawn from 20 Schools Participated in the Revel.*

*The activities for the Revel was (1) Handi Craft with waste Material, Vegetable Carving, Drawing, Clay Modelling, Pick & Speak, Fancy Dress, Mono acting & cultural Activities. The Cub and Bulbuls Participated in all the Activates.*

*At the Presence of a hugh gathering of Parents, the Valicedtory function took Place. Mr. Bheemaiah Secretary, Daffodils English School, Sanjayanagar was the Chief Guest, Mr. Sham Sunder Sharma, District Chief Commissioner Presided over the function Miss Ramalatha, District Commissioner (G) was also Present.*

*Mrs. Revathi, leader trainer (B) Mrs. Surbhi, LT(C) Mr. P. Nanda Kumar D.S., Mr. Sripad RSL, Mr. Yogish RSL, Miss Sruthi, President Guide & Miss Krupa Vijay Worked for the Success of the Revel. The Revel came to an end around 5.30 p.m.*




Sri P.R. Ramesh, Worshipful Mayor of Bangalore installed as Patron by Sri Sham Sunder Sharma, Dist. Chief Commissioner and Sri G. Basavaraju, Deputy Mayor of Bangalore installed as Vice-Patron of Bangalore North Dist. BS&G, by Sri. Prem Kumar, District Commissioner (S) on 21.12.2003 at the Campus of Sri. Chamundi Scouts Group, Malleshwarm, Bangalore.




Sri Kondajji B. Shanmukhappa, State Chief Commissioner, Lighting the Lamp and Sir M.R. Seetharam, M.L.A. Malleswaram, declared open the newly constructed "Narayana Reddy - Nishant" Memorial Hall on 20.12.2003 at the Campus of Sri. Chamundi Scouts Group, Malleshwarm, Bangalore.






1909 Some of the girls who arrived in uniform, calling themselves "Girl Scouts". Later B-P organised them as "Girl Guides"



1912 B-P Married Miss Olave St. Clair Soames, later to become World Chief Guide (Lady B-P). The car was the wedding present given by his scouts who subscribed one penny each



1941 B-P, Chief Scout of the World, died in Kenya. He was borne to his last resting place between a guard of honour of scouts



1947 World Jamboree of Peace held in France Scouts from Bengal (India) eager to see the camp Newspaper.

*From the*
**ACORN**
*to the*
**OAK**




22nd February

# 100 — 2007

A Hundred years of Promise

in 2007, Scouting will celebrate its Centenary

Scouting/Guiding contributes to the Education of young people.

Scouting/Guiding is Education for life.

Scouting/Guiding help a better world where young people play a constructive role.

Regd as News Paper (Magazine) No : **CPMG/KA/BGW-549/2002-05**



ಕರ್ನಾಟಕ ಸ್ಕೌಟ್ ಮತ್ತು ಗೈಡ್

KARNATAKA SCOUT & GUIDE

News Magazine

If not delivered please return to :

**EDITOR, Karnataka Scout & Guide**
State Headquarters, Prof. P. Sivashankar Circle
Kondajji Basappa Road, Fort
Bangalore - 560 002

BOOK-POST




SRI. N.V. ESHAPPA
ASST. TEACHER
C/O JAVALI NANJAPPA
K.K.ROAD
BHADRAVATHI TQ

***Published for :*** The Bharat Scouts & Guides, Karnataka, State Headquarters, Fort, Bangalore - 560 002 by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.